ಇದು ಲಕ್ಷ್ಮೀಪತಿ ಅವರ ಚೊಚ್ಚಲು ಕೃತಿ ಎಂಬ ರಿಯಾಯಿತಿ ಈ ಕೃತಿಗೆ ಬೇಕಿಲ್ಲ. ಈ ಕವಿತೆಗಳಿಗೆ ಒಂದು ರೀತಿಯ ಸ್ವಯಂದೀಪಕತೆ ಇದೆ. ಹರೆಯದ ಈ ಕವಿಗೆ ಅನುಭವವನ್ನು ಹೇಗಾದರೂ ಉಡಾಯಿಸಿಬಿಡಬೇಕೆಂಬ ಹುಸಿ ಹುರುಪಿಲ್ಲ ; ಏನು ಕಂಡರೂ ಬರ್ಫದ ಹಾಗಿದ್ದೇವೆ ಎಂದು ಕೊಳ್ಳುವ ನಿರಂತರ ವ್ಯಸನಗಳ ಸಿನಿಕತನವಿಲ್ಲ ; ಸಿದ್ಧಾಂತಗಳನ್ನು ಘೋಷಣೆ, ಹೇಳಿಕೆಗಳ ಮಟ್ಟದಲ್ಲಿ ಮಾತ್ರ ಗ್ರಹಿಸುವವರ ಪೋಸುದಾರಿಕೆ ಇಲ್ಲ.

ಬದಲಾಗಿ ಮೊದಲು ಮುಬ್ಬು ಮಬ್ಬಾಗಿ ಕಂಡರೂ ಗಮನವಿಟ್ಟು ಓದಿದಾಗ ಅಂತರ್ಜಲದಂತೆ ದುಮುದುಮಿಸುವ ಭಾವಗೀತಾತ್ಮಕತೆ ಈ ಕವಿತೆಗಳ ಕೆಳಗೆ ಹರಿಯುವುದು ಕಾಣಿಸುತ್ತದೆ. ಇಲ್ಲಿಯ ಕಿರುಗವಿತೆಗಳು ಮತ್ತು ನೀಳ್ಗವಿತೆಗಳೆರಡರಲ್ಲೂ ಎಲ್ಲ ಅನುಭವವನ್ನು ಒಂದು ಉತ್ಕಟ ಭಾವಕ್ಷಣದ ಸಂಧಿಯೊಳಗೆ ತರುವ ಪ್ರಯತ್ನ ಜರುಗಿದೆ.

'ರಂಜಾನಿನ ಕೊನೆಯರಾತ್ರಿ' 'ಮುಕ್ಕಲಿ ಭೋಪಾಲ್' 'ಬಾವಲಿ' ಮೊದಲಾದ ಕವಿತೆಗಳನ್ನು ಮೊದಲ ಸಂಕಲನದಲ್ಲೇ ಬರೆದಿರುವ ಕವಿಗೆ ಯಾರ ಶಿಫಾರಸೂ ಬೇಕಿಲ್ಲ.

—ಎಚ್. ಎಸ್. ಶಿವಪ್ರಕಾಶ

# ನವಿಲು ಕಿನ್ನರಿ

## ಲಕ್ಷ್ಮೀಪತಿ



# ನವಿಲು ಕಿನ್ನರಿ

ಪ್ರಿಯ ಬಾಲುಗೆ,

ನನ್ನನ್ನೋದುವ ವಿಶ್ವಾಸಕ್ಕಾಗಿ,

— ಲಕ್ಷ್ಮೀಪತಿ ಕೋಲಾರ

ಲಕ್ಷ್ಮೀಪತಿ

ಶುಭದ ಪ್ರಕಾಶನ
ಜರಗನಹಳ್ಳಿ
ಜೆ.ಪಿ. ನಗರ ಅಂಚೆ
ಬೆಂಗಳೂರು-560 078

**NAVILU KINNARI :** A Collection of poems in **Kannada by Lakshmipathy and** Published by **Shubhada Prakashana** Jaraganahally, J. P. Nagar Post, **Bangalore – 560 078.**

First impression : 1989

**Pages : 56**



**Cover Design : P. S. Kumar**

**Price : 12 Rupees**

ಉಟ್ಟಂತ ಉಡುಗೆ ತೊಡುಗೆಯನೆಲ್ಲ ಸೆಳೆದುಕೊಳಬಹುದಲ್ಲದೆ
ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದುಕೊಳಬಹುದೆ ?

– ಅಕ್ಕಮಹಾದೇವಿ

Printed at :

**Nethra Printers**
**6th Main, Chamarajpet**
**Bangalore – 560 018**

# ಪ್ರಕಾಶಕರಿಂದ...

ಪ್ರೀತಿ, ಪ್ರೇಮಗಳ ಕನಸು ಕಾಣುವ ವಯಸ್ಸಿನಲ್ಲೇ ಬಂಡಾಯ, ಹೋರಾಟಗಳಲ್ಲಿ ಬೆಳೆದು, ಕೋಲಾರ ಜಿಲ್ಲೆಯ ಕುತೂಹಲ ಕೆರಳಿಸಿ ಮನಸೆಳೆದಿದ್ದ 'ಸಂಚಿಕೆ' ಪತ್ರಿಕೆಯ ವ್ಯವಸ್ಥಾಪಕ ಸಂಪಾದಕರಾಗಿ, ಕನ್ನಡದ ಕೆಲವು ನಿಯತ ಕಾಲಿಕೆಗಳಲ್ಲಿ ಕೆಲಸ ಮಾಡಿರುವ ಶ್ರೀ ಲಕ್ಷ್ಮೀಪತಿಯ ಕಾವ್ಯಕ್ಕಿಂತಲೂ ಈತನ ವ್ಯಕ್ತಿತ್ವ ನಮಗೆ ತುಂಬಾ ಇಷ್ಟ.

ಈ ಸಂಕಲನವನ್ನು ಹೊರತರುತ್ತ ನಮ್ಮ ಗೌರವ ಸೂಚಿಸುತ್ತಿದ್ದೇವೆ.

ಯಾವುದೇ ಕಾಲೇಜು ವಿಶ್ವವಿದ್ಯಾಲಯಗಳನ್ನು ತುಳಿಯದ, ಓದಿನ ಒಲವನ್ನು ರೂಢಿಸಿಕೊಂಡಿರುವ ಅಂಕಣ್ಣನ ಮಾತುಗಳನ್ನು ಇಲ್ಲಿ ದಾಖಲಿಸಿ ಯಾವುದೇ ಬಿರುದು, ಪದವಿಗಳಿಲ್ಲದ ಕಾವ್ಯಾಸಕ್ತರ ಪ್ರತಿನಿಧಿಸಿದೆ.

ಇಲ್ಲಿನ ಕವಿತೆಗಳು ಗಹನ, ಗಂಭೀರ, ಬಿಗಿ, ಬಿಗುಮಾನಗಳಿಂದ ಕೂಡಿದ್ದರೂ ಓದುವ ಓದುಗರನ್ನು ತಡೆದು ಓದಿಸಿಕೊಳ್ಳುತ್ತವೆ.

ಜರಗನಹಳ್ಳಿ ಶಿವಶಂಕರ
ಶುಭದ ಪ್ರಕಾಶನದ ಪರವಾಗಿ

# ಪದ್ಯಗಳ ಕುರಿತು....

ಪ್ರೀತಿಯ ಲಕ್ಷ್ಮೀಪತಿ,

ನಿಮ್ಮ ಕವಿತೆಗಳನ್ನು ಓದಿದೆ. ಕಾವ್ಯ ಕೆರೆಯ ತೀರದಲ್ಲಿರುವ ನಾನು ಕೆರೆಯ ಆಳವನ್ನು ಅರಿಯಲಾರೆ. ಆದರೂ ಓದಿದ ಮೇಲೆ ನನ್ನ ಗ್ರಹಿಕೆಗೆ ಸಿಕ್ಕಿದ್ದಿಷ್ಟು :

ನಿಮ್ಮ ಬಹುಪಾಲು ಕವಿತೆಗಳು ಬದುಕಿನ ನೋವನ್ನು ಹೇಳುತ್ತವೆ ; ಮುಂದೊದಗುವ, ಸುಖದ ಕನಸು ಕಾಣುತ್ತವೆ. 'ಕಾಡುಜಾನಪ', 'ಹೊಂಚಿಕೂತ ಉಸಿರು ಘರ್ಜನೆ', 'ರಂಜಾನಿನ ರಾತ್ರಿ', 'ಸಾವಿನರ ಮನೆಯ ಮುಂದೆ' – ಮುಂತಾದ ಕವಿತೆಗಳಲ್ಲಿ ನೋವಿನ ಅನುಭವ ಗಾಢವಾಗಿದೆ. ಕವಿತೆಯ ವಸ್ತುವಿನ ಹಿನ್ನೆಲೆಯ ಪೂರ್ತಿ ಅರಿವಿದ್ದಿದ್ದರೆ 'ಮಸ್ಕಲಿ ಗೊಡಾಲ್', 'ಒಥೆಲೊ ಮತ್ತು ಅಮೃತಮತಿ' ಹಾಗೂ 'ಗಾರುಡಿ ಗಂಗ ಭಾರತ'ದಂತಹ ಕವಿತೆಗಳನ್ನು ಇನ್ನೂ ಹೆಚ್ಚಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು. ಅಲ್ಲೊಮ್ಮೆ ಇಲ್ಲೊಮ್ಮೆ ಕೆಲವು ಸಾಲುಗಳು ಹೇಳಿಕೆಗಳಂತಿವೆ. ಆದರೂ 'ಸೂರ್ಯ ಮತ್ತು ಭೂಮಿ', 'ನವಿಲು ಕಿನ್ನರಿ' ಮುಂತಾದ ಕವಿತೆಗಳಲ್ಲಿ ನಿಮ್ಮ ಕಾವ್ಯಸೃಷ್ಟಿಯ ಶಕ್ತಿ ಎದ್ದು ಕಾಣುತ್ತದೆ. ಸಮಾಜ ಸಾಂಸ್ಕೃತಿಕವಾಗಿ ಬದಲಾಗಬೇಕೆನ್ನುವ ನಿಮ್ಮ ಬಯಕೆಯನ್ನು ಕವಿತೆಗಳು ಹೇಳುತ್ತವೆ. ಉದಾಹರಣೆಗೆ 'ನವಿಲು ಕಿನ್ನರಿ' ಕವಿತೆಯ ಈ ಸಾಲುಗಳನ್ನು ನೋಡಬಹುದು :

ಹೆಡೆಗಳೆತೆಯ ಫೂತ್ಕಾರವ ಹೊಮ್ಮುರಿ ಕಟ್ಟಿ
ಹೆಡೆ ಹೆಡೆಗೂ ನಾದಗವಿಯ ಹಾಡ್ಯ ಕಟ್ಟು ನಾಗನವಿಲೆ

ನಿಮ್ಮ ಯಾವ ಕವಿತೆಯಲ್ಲೂ ವಿಷಾದದಿಂದ ಹೊರತಾದ ಸಂತೋಷವನ್ನು ಕಾಣಲಾಗುವುದಿಲ್ಲ. ಕವಿತೆಯ ವಸ್ತು ಕಠಿಣವೆನಿಸಿದರೂ ಭಾಷೆ ಕಠಿಣವಲ್ಲ. ಇದಕ್ಕೂ ಮಿಗಿಲಾಗಿ ನಾನು ಇನ್ನೇನು ತಾನೇ ಹೇಳಲು ಸಾಧ್ಯ ?

ಬೆಂಗಳೂರು

–ಅಂಕಣ್ಣ

# ನನ್ನೊಳಗಿನ ಕಪ್ಪು ಚಿಟ್ಟೆ...

ಬಹುಶಃ ನನ್ನ ದೌರ್ಬಲ್ಯವನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ, ಈ ಕಾಲಕ್ಕೆ ಸಲ್ಲದ ಕನಸುಗಾರ ನಾನು. ಬಾಲ್ಯದಿಂದಲೇ ವಾಸ್ತವಗಳೊಂದಿಗೆ ಹೋರಾಡಲಾಗದೆ ಕನಸುಗಳೊಂದಿಗಿನ ಕರುಳ ನಂಟನ್ನೂ ಕಡಿದುಕೊಳ್ಳಲಾಗದೆ ಅಗಣಿತ ಗೊಂದಲಗಳ ಗೂಡಿನಲ್ಲಿ ಚಿಟ್ಟೆಯಾಗಿ ಅರಳುವ ರೂಪಾಂತರ ಕ್ಷಣವೊಂದಕ್ಕಾಗಿ ತಹತಹಿಸುತ್ತಿದ್ದೇನೆ. ನನ್ನೆಲ್ಲ ಗೊಂದಲಗಳ ಈ ಉತ್ಕಟ ಜಗತ್ತಿನಿಂದ ನನ್ನ ನಾನಾದ ಈ ಬಿಡುಗಡೆಯ ಕಾವ್ಯ ಬಹುಶಃ ಹೀಗೆ ಹುಟ್ಟಿಕೊಂಡಿದೆ ಎನಿಸುತ್ತೆ.

ತನ್ನ ತಾನರಿವುದೆಂದರೆ ಪ್ರತಿಕ್ಷಣವೂ ಹೊಸ ಹುಟ್ಟು ಪಡೆದಂತೆಯೇ. ಹೀಗೆ ಇಲ್ಲವಾಗುತ್ತಲೇ ಹೊಸ ಅಸ್ತಿತ್ವದ ಆವಿಷ್ಕಾರ ನಡೆಯುವ ಬದುಕಲ್ಲಿ ನನ್ನೊಳಗೇ ಒಬ್ಬ 'ಮಹಾಮೌನಿ' ನಿರಂತರ ನನ್ನೆಲ್ಲ ಬದಲಾವಣೆಗಳ ಕೊಂಡಿಯಾಗಿ ಉಳಿದು ಬಂದಿದ್ದಾನೆ. ಉದ್ವಿಗ್ನ ಬದುಕಿನ ಹಿಂದಿನ ನಿರುದ್ವಿಗ್ನ ನೋಡುಗನಾಗಿದ್ದಾನೆ. ತನ್ನ ಪಾಲಿಗೆ ಅನಿರೀಕ್ಷಿತವಾದ, ಇನ್ನೂ ತನಗೆ ಬಗೆ ಹರಿಯದೆಯೇ ಉಳಿದಿರುವ ಲೋಕವೊಂದರ ಎದುರು ದಿಙ್ಮೂಢನಾಗಿರುವ ನನ್ನೊಳಗಿನ ಅವನನ್ನು ಕದಲಿಸಲು ನಾನು ಹಲವು ಪ್ರಯತ್ನ ನಡೆಸಿದ್ದೇನೆ. ಅವನ ನಿದಿರೆ ತೆಗೆದು ನಾನು ಅಕ್ಷರ ನೈವೇದ್ಯ ಹಿಡಿದು ಆಲಯಗಳಲ್ಲಿ, ನಿರ್ಮಾನುಷ ಲೋಕಗಳಲ್ಲಿ ಸಂಧಿಸಿ ಗೋಗರೆದಿದ್ದೇನೆ. ನನ್ನದಲ್ಲದ ಸಣ್ಣತನಗಳಿಗಾಗಿ ತನ್ನನ್ನು ತಾನೇ ಬೊಟ್ಟುಮಾಡಿಕೊಂಡು ಅಸಹ್ಯಸಿಕೊಳ್ಳುವ ಆತ್ಮದಮನ ಸತ್ಯಾಗ್ರಹಿಯಂತೆ ಅವನು ಈ ಪ್ರಪಂಚದ ವ್ಯಾಪಾರದಿಂದಲೇ ದೂರ ಉಳಿದು ಬಿಟ್ಟಿದ್ದಾನೆ. ಅವನೊಂದಿಗೆ ನಾನಿನ್ನೂ ಮಾತನಾಡಲು ಸಾಧ್ಯವೇ ಆಗಿಲ್ಲ. ಆದರೆ ಅವನೊಂದಿಗೆ ನಾನು ಮಾತನಾಡದೇ ಇರಲು ಹೇಗೆ ಸಾಧ್ಯ ? ಅವನನ್ನು ಕದಲಿಸಲೇ ಬೇಕು. ಅವನು ಮಾತ



ನಾಡುತ್ತ ನಾನು ಮೌನವಾಗಬೇಕು. ತನ್ನ ಚರ್ಮವೆಂದು ನಂಬಿಬಿಟ್ಟಿರುವ ಅವಮಾನಗಳ ಪೊರೆ ಕಳಚಿ ಅವನು ನಾನಾಗಬೇಕು.

ಆಗ ನನ್ನನ್ನು ಸದಾ ಕಾಡುವ ಕುತೂಹಲಗಳಿಂದ ಸಾವು ಮತ್ತು ಕಾಮವನ್ನು ನಿರುಕಿಸಲು ಅವನ ಪ್ರಾಚೀನ ಮೃಗನಯನಗಳು ನನಗೆ ಲಭಿಸಬಹುದು. ನನ್ನ ಕುತೂಹಲದ ಹೂಗಳ ಸಂಗೀತ ನನಗೆ ಕಾಣಿಸಬಹುದು. ಹುಣ್ಣಿಮೆಯ ನಡಿಗೆ ಅರ್ಥವಾಗಬಹುದು. ಅವನು ಅಪಹರಿಸಿ ಇಟ್ಟುಕೊಂಡಿರುವ ಮನಸಿನ ಲಕ್ಷ ವಾಸನೆಗಳ ನಕ್ಷೆಯೇ ನನಗೆ ಸಿಗಬಹುದು.

ನಾನು ಕಾಯುತ್ತಲೇ ಇದ್ದೇನೆ, ಅವನು ಕದಲುವ ಕ್ಷಣಗಳಿಗಾಗಿ. ಬಾಂದಳದ [illegible] ಮಧುರಚೆನ್ನರ ಕದಲಿಸಿದಂತೆ ; ಮಹಾದೇವಿಯ ಮನೋತತ್ವರಚನೆಯನ್ನು ನಿರಾಕಾರ ಚೆನ್ನನು ನಿರಂತರ ಕದಲಿಸುತ್ತಲೇ ಇದ್ದಂತೆ-ಇವನನ್ನು ಕದಲಿಸಬಲ್ಲ ಆ ಶಕ್ತಿಗಾಗಿ.

ಕಾಲದ ಕಣ ಹೇಳುವ ಬೆಳದಿಂಗಳ ರಾತ್ರಿಯ ತಿತ್ತಿರಿ ಹಕ್ಕಿಯ ಅನಾದಿ ಹಾಡು ಅಥವಾ ಬಯಲು ಮೌನದ ಸೀಳಿ ಬರುವ ಮರಕುಟಿಗನ '[illegible] ಸಪ್ಪಳ' ಅಥವಾ ಜನಾರಣ್ಯದ ಇರುವೆಗಳಲ್ಲೂ ತಪ್ಪದೆ ಎದೆ ಕುಟುಕುವ ಯಾವುದೋ ನಿಶ್ಶಬ್ದ ಆಕ್ರಂದನ ಅವನ ಅಳ್ಳಕದ ಮಾತುಗಳಿಗೆ ಕಬ್ಬದ ರೆಕ್ಕೆಗಳನ್ನು ಜೋಡಿಸಿಬಿಡಬಹುದು. ಪ್ರತಿಕ್ಷಣವೂ ಅವನನ್ನು ಬೆಂಗಾವಲಿಸುತ್ತಲೇ ಬಂದಿರುವ ಅನೂಹ್ಯ ಜಗತ್ತು ಕರಗುತ್ತಿದ್ದಂತೆಯೇ ಅವನ ಶಬ್ದನಾಭಿ ಅರಳಬಹುದು. ನನಗೆ ಸಹಜ ಪ್ರಪಂಚ ಕಾಣಿಸಲಾರಂಭಿಸಬಹುದು.

ಹುಣ್ಣಿಮೆಯ ಚಂದ್ರನನ್ನು ನಾನು ಮೊದಲಬಾರಿಗೆ ನೋಡಿದ ನೆನಪೇ ಉಳಿದಿಲ್ಲ. ನನ್ನ ಗುಬ್ಬಿ ಮನದೊಳಗೆ ನನಗೆ ಗೊತ್ತಿಲ್ಲದಂತೆ ಗೂಡುಕಟ್ಟಿಕೊಂಡ ಕಾಡು ಎಂದಿನಿಂದ ನನ್ನನ್ನು ಬಸುಮಾತಕ್ಕೆ ಕರೆಯುತ್ತಿದೆಯೋ ಗೊತ್ತಿಲ್ಲ. ಶ್ರಾವಣದ ಮೇಘಗಳು ಎಂದು ನನ್ನ ನಸುಗತ್ತಲ ಜಾವದ ಭೂಮಿಯಲ್ಲಿ ಅಗೋಚರ ಕೋಲ್ಮಿಂಚಿನ ಹಾಡುಗಳನ್ನು ಬಿತ್ತಿಹೋದವೋ ನೆನಪಿಲ್ಲ. ಎದ್ದು ಬಂದು ನನ್ನೊಳಗೆ ಹರಿಯುತ್ತಿದ್ದ ನದಿಗಳ ಸಂಗೀತವನ್ನು ಯಾವ ಹೊನ್ನದ ಕೈಗಳು ಯಾವಾಗ ದಿಕ್ಕೆಡಿಯಾಗಿದ್ದವೋ ಎನ್ನುವುದು ಕೂಡ ಬಗೆಹರಿದಿಲ್ಲ. ನೆಲವೇ ಇಲ್ಲದ ಲೋಕದಲ್ಲೀಗ ಅವಿರತ ಹಾರುತ್ತಲೇ ಇರಬೇಕಾಗಿದೆ ಹಕ್ಕಿ.

ಕೊಂಡಾಗ—ಅನೇಕ ಹೃದಯವಂತರ ಗೆಳೆತನವನ್ನು ತಂದುಕೊಟ್ಟ ಕಾವ್ಯಕ್ಕೆ ನಾನು ಚಿರಋಣಿಯಾಗಿದ್ದೇನೆಂಬ ಸತ್ಯ ಗೊತ್ತಾಯಿತು.

ಎದೆಯೊಳಗೇ ಉಳಿದು ಕಾವ್ಯದ ಗೂಡು ಕಟ್ಟುವ ಗೆಳೆತನಕ್ಕೆ ಋಣ ತೀರಿಸಿ ದೂರವಾಗಬೇಕೆ ?

'ನವಿಲು ಕಿನ್ನರಿ'ಯನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಸೀತಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀಯುತ ಮುನಿಧರ್ಮಯ್ಯ ಅವರಿಗೂ ಮತ್ತು ತಮ್ಮ ಪ್ರೀತಿ, ಶ್ರದ್ಧೆಗಳಿಂದ 'ನವಿಲು ಕಿನ್ನರಿ'ಗೆ ಜೀವ ತುಂಬಿದ ಕಾರ್ಮಿಕ ಮಿತ್ರರಿಗೆ ನಾನು ಋಣಿ.

ರಾಮಲಿಂಗ ನಿಲಯ
ಸಂತೇ ಮೈದಾನ
ಎಂ.ಬಿ. ರಸ್ತೆ, ಕೋಲಾರ–563 101

—ಲಕ್ಷ್ಮೀಪತಿ

## ಒಳಗೆ

## ಚಂದಿರನ ಗೆಳೆಯ

ಬಂದೆಯಾ ಚಂದಿರನ ಗೆಳೆಯ, ಒಳ ಬಾ
ನೆನ್ನೊಳ ಸಾಲುಗಳ ಸವಿನೆನಪ ಬಳಸಿ ಬಾ
ಮಾಯದ ಕನಸುಗಳ ತುಂಬಿ ಸುತ್ತಿ ಮುತ್ತಿ ಬಾ
ನಿನ್ನ ಉನ್ಮಾದ ತುಸುಮಾತಿಗಾಗಿ
ನನ್ನ ಮುಗ್ಧತೆ ಕಾದಿದೆ

ಆ ಮಿಡಿ ಹಕ್ಕಿಯ ಮೋಹಕ ಹಾಡಿನಲ್ಲಿ
ನೀನು ಬಂದೇ ಬರುವೆಯೆಂಬ ಮತ್ತು
ಎಂಥದೋ ತಲ್ಲಣದ ಮಧುರ ಸಂದೇಶವಿತ್ತು

ತಿಳಿ ಹೂಗಾಳಿ ನಿಶ್ಶಬ್ದ ಹೂಟ ಹೂಡಿ
ಕನವರಿಸುತಿದ್ದ ತರಗೆಲೆಗಳಾಟಗಳ
ತನ್ಮಯದ ಹೆಜ್ಜೆ ಸಪ್ಪಳಗಳನ್ನಾಗಿಸಿ
ನನ್ನೆದೆಯೊಳಗೆ ಹುಚ್ಚು ಒಸಗೆಗೆ ಕುಣಿವ ಮೋಡ

ಪ್ರೀತಿಯು ಆಳದಲ್ಲಿದ್ದ ಹಸಿವನ್ನೋ
ಹಸಿವೆಯು ಆಳದಲ್ಲಿದ್ದ ಪ್ರೀತಿಯನ್ನೋ
ತಿಂಗಳ ಬೆಳಕ ಚುಕ್ಕಿಗಳಂತೆ ಚೆದುರಿಸಲು
ಕಾಲವೊಬ್ಬ ಮಾಯಾವಿ
ವಿಲಕ್ಷಣ ಭೀತಿಯ ಪಟ್ಟು ಹಿಡಿದು ಆಡುತ್ತಿತ್ತು

ಕ್ರಮೇಣ ಚಂದ್ರನನ್ನು ಮಂಜು ಮುಸುಕಿ
ಆತನ ಮಾಸಿದ ನಿಗೂಢ ಬೆಳಕು
ಮೂಕ ಅಲೆದಾಟ್ಟಿಕೆಯಲ್ಲೇ ಅವನತವದನೆಯಾದ
ಈ ಮನಸ್ಸಿನ ಒಂಟಿತನಕೆ ಸವಾಯಿತು

ನಿನ್ನ ಉನ್ಮಾದ ಪಿಸುಮಾತಿಗಾಗಿ
ಅಲಿಂದ ಮುಗ್ಧ ಕೆಯಿನ್ನೂ ಕಾದಿದೆ
ಆಹಾ ! ಒಂದೆಂಥ ಧ್ವನಿಯು ಚಂದಿರನ ಗೆಳೆಯು
ಏನದ್ಭುತ ಮೋಹಕ ಮಾಯೆ !

## ಬಾವಲಿ

ಜಟೆ ಬೆಳೆಸಿಕೊಂಡ ವೃದ್ಧ ಆಲದ
ಹುಷಾರು ಕಪಿಯಂತೆ
ನವಹೂಗಳ ಪ್ರಾಕ್ತನ ಕೊಂಬೆಗೆ
ಹಗಲುದ್ದ ತೂಗುಬಿದ್ದ ಸಿದ್ಧ
ತಾರಾಮಂಡಲದ ನಲುಮೆ ಪರಗಳ ಜಗ್ಗಿ
ಆಕಾಶದ ಮುಡಿ ಮೊಲೆಗಳಲ್ಲೂ ತನಿ ಬೆಳದಿಂಗಳುಕ್ಕಿತು
ನೊರೆಗುಳ್ಳೆಗಳಲ್ಲಿಷ್ಟು ವೈಢೂರ್ಯಗಳ ರಂಗೋಲಿ ಚಾಪ್ಪೆ ನೆರೆಯಿತು

ನೆಲದ ಮೇಲಿನ ಕ್ಷುದ್ರ ಕನಸೊಂದು ಚೀಕಿ ಚೀಕಿ
ಗಾಳಿಯು ಗದ್ದದ ಸೂಜಿಗ ರಕ್ತ ಹೀರಿದು
ಹಾರುವಂತಾದ ಒಗಟು ಸೀಳೆಂದು ಸರದಾರ
ಲೇಡಿ ಮ್ಯಾಕ್‌ಬೆತ್‌ ಕಣ್ಣುಗಳಲ್ಲಿ ತಪಸ್ಸು ಕೂತ ನಿಶಾಚರ

ಕಾಲದ ಕಣ್ಣ ಒತ್ತಿಬಿಟ್ಟಿ
ಭ್ರಾಂತ ಕಲಾವಿದನ್ನಾರೋ ಬಿಡಿಸಿದ ಅಸಹಜ ಕೃತಿಯು
ಸುಟ್ಟು ಕರುಕಾದ ಸೊಟ್ಟ ಬಾವಲಿ
ಹೊಸ ಕಣಜಗಳಾಳದಲ್ಲಿ
ಗೂಡು ಕಟ್ಟಿ ನಿದಿಗಳ ಗುಂಜಾರವಿಸಿದ
ಶ್ಮಶಾನ ಸಾಮ್ರಾಜ್ಯಗಳ ಬೇಹುಗಾರ

ಗುಹಾಂತರ್ಯುಗದ ನಿಗೂಢತೆಯೊಂದು
ಸ್ವಪ್ನಿಯಸ್ತು ಸಮುಸ್ತಗತ ಕಬ್ಬುವಾಗಿ, ಕುಬ್ಬುವಾಗಿ
ಹಾರುವ ಪಕ್ಷಿಯಸ್ನಾಗಿದ್ದು ಆಹ ಚೋದ್ಯ ?
ಸ್ಮಶಾನದ ಹಾಡಿಗೆನಿತು ಸುಂದರ ವಾದ್ಯ !

ಜಟೆ ಬೆಳೆಸಿಕೊಂಡ ವೃದ್ಧ ಆಲದ
ಹುಷಾರು ಕಪಿಯಂತೆ ...

## ಗಂಧವತಿಯರು ನಡೆದಾಡುವ ಬ್ರಿಗೇಡ್

ಆ ಪ್ರೇಕ್ಷಕಿಯರ ರೋಮ ರೋಮಗಳಲ್ಲೂ
ಹಾಲಿವುಡ್‌ನ ರೋಮಾಂಚನಗಳು ಅರಳಿ ಹಾಡುತ್ತವೆ
ಸೋಫಿಯಾ ಲೊರೇನಳಂತೆ
ಸೌಂದರ್ಯದೊಂದಿಗೆ ಸಂವಾದಿಸುತ್ತ ಸಾಗುತ್ತಾರವರು
ಅವರು ಬ್ರಿಗೇಡ್ ರಸ್ತೆಯ ಸಾಮ್ರಾಜ್ಞಿಯರು

ಮಾಂಸಪಿಂಡಗಳನ್ನು ತೀಡು ಕಂಡ ಕನಸನ್ನವರು
ಚರ್ಮದ ಬಟ್ಟೆಗಳಲ್ಲಿ ತುಂಬಿ ನಡೆಯುತ್ತಾರೆ
ವನದೇವಿಯ ಹೊಳೆ ಹಿಂಡಿ ತಂದ
ಮಸಣ ನೆತ್ತರನ್ನು ಸೋರಗೊಟ್ಟಿಸುತ್ತಾರೆ
ಲಕ್ಷ ಪಾದಗಳ ಮೇಲೆ ಸರಿಯುವ ಹರೆಯದ ಹಂಸಗಳವರು
ಹಾರಿದ ದಿಕ್ಕಿನಲ್ಲಿ ಮೂಡುತ್ತವೆ
ಮದಿರಾ ನಗೆಯ ಕಾಮನ ಬಿಲ್ಲುಗಳು

ಪುರಾಣ ದೈತ್ಯಸುಂದರಿಯರು ನಡೆದಾಡುವ ಈ ನೆಲದಲ್ಲಿ
ಮನಸುಗಳು ಛದ್ಮವೇಷಧಾರಿಗಳಾಗಿ ಪ್ರವಹಿಸುತ್ತವೆ
ರಾತ್ರಿ ತಲೆ ಮರೆಸಿ ಬರುವ ಸೂರ್ಯನ ಹುಡುಕುವ
ಸಾವಿರ ಚಂದ್ರ ಕುಡಿಗಳಾಗುವ ಕಣ್ಣುಗಳು
ಮಾತ ಮೀರಿದ ಮೌನ ಭಾಷಾ ಕೋವಿದರಾಗುತ್ತವೆ
ನೀಲಿ ಚಿಲುಮೆಗಳ ಈ ನಂದನೋದ್ಯಾನದಲ್ಲಿ
ಬೀಸುವ ಶುದ್ಧ ಐರೋಪ್ಯ ವಾಸನೆಯ ಆ ಒಂದು ಘಳಿಗೆ
ನಾವು ಸುಂದರ ಪರಿಯ ಮಾಳಿಗೆಯೊಳಗಿನ
ಕ್ಷಣಿಕ ಬಂಧಿಗಳಾಗಿರುತ್ತೇವೆ

ಆಗ ಈ ಲೋಕದ ಮಾಯಾಂಗನೆಯರು
ನಮ್ಮೆದೆಯ ಗಾಯಗಳ ಕೋಟೆಕ್ಕೆ ನೆತ್ತರಲಿ
ತೆರೆಯುತ್ತಾರೆ ಯಕ್ಷ ಬಜಾರಿನ ವೈವಿಧ್ಯ ವ್ಯಾಪಾರದ

ಆ ಪ್ರೇಕ್ಷಕಿಯರ ರೋಮ ರೋಮಗಳಲ್ಲೂ
ಹಾಲಿವುಡ್‌ನ ರೋಮಾಂಚನಗಳು ಅರಳಿ ಹಾಡುತ್ತವೆ
ಸೋಫಿಯಾ ಲೊರೇನಳಂತೆ
ಸೌಂದರ್ಯದೊಂದಿಗೆ ಸಂವಾದಿಸುತ್ತ ಸಾಗುತ್ತಾರವರು
ಅವರು ಬ್ರಿಗೇಡಿನ ಸಾಮ್ರಾಜ್ಞಿಯರು

## ಒಥೆಲೊ ಮತ್ತು ಅಮೃತಮತಿ

**ಅಮೃತಮತಿ :**

ಓ ನನ್ನ ಮೂರ್ ದೊರೆ ಒಥೆಲೊ
ಆತ್ಮವಂಚನೆ ಇನ್ನು ಸಾಧ್ಯವಿಲ್ಲ
ಪ್ರತಿ ಹುಣ್ಣಿಮೆಯನ್ನೂ ಓಯಸಿಸ್ ಹೊಳೆಗಳಾಗಿ
ಸ್ಮೃತಿಲಿಗಳ ನೆರಳು ಕವಿಯಲಾಗದು
ಆಲಿಸಿಕೋ ಇನಿಯ ಇನ್ನಾದರೂ
ನನ್ನೆದೆಯೊಳಗೇ ತಿರುವಿ ನಾಟಿಕೊಂಡ
ಕಣ್ಣ ಪಾತಾಳದ ಹವಳ ಸತ್ಯಗಳ

ತ್ರಿಕರಣಶುದ್ಧ ಪ್ರೀತಿಗೆ ಅಂದದ ವ್ಯಾಖ್ಯಾನ ನಾನು
ಹಸುರಿನ ಪೊದೆ ಮನದಲ್ಲಿ ಕೋಗಿಲೆಯಂತವಿತಿದ್ದ
ಅಷ್ಟಾವಂಕನು ರತಿರೋಮದ ಚಾಟಿ ಬೀಸಿ
ನಿಗೂಢ ಅಮೃತ ಸರಸ್ಸಿನಲ್ಲಿ
ಕಾಮ ಕಲಾಪದ ಚಂಡ ಅಲೆಗಳನ್ನೆಬ್ಬಿಸಿದ
ಸೂರ್ಯನ ಹೆಜ್ಜೆ ಹೆಜ್ಜೆಗೂ
ಅವನು ಕಲಿಸಿದ : ನನ್ನ ಸುಕುಮಾರ ಪೊರೆ
ನೈತಿಕತೆಯ ಮೆಟ್ಟಿ ನಿಂತ ಕಾಮದಾರ್ಢ್ಯ ಕರೆ
ಮತ್ತು ಸಮಾಜದ ಭೀತ ತೆರೆ
ಸರಿಪಡೆಯ ಗುಪ್ತ ಸತ್ಯಗಳಲ್ಲಿ ನನ್ನ ಸುಖದ ಕ್ಷಣಗಳಡಗಿದ್ದ

ಆ ಒಂದೊಂದೂ ಸುಖಗಳ ನಿರಂತರ ಸ್ಫೋಟಿಸಿ
ನನ್ನ ಸೌಖ್ಯಗಳ ನಶ್ವರತೆಯನ್ನು ತೀವ್ರಗೊಳಿಸಿದ
ಆ ಅಂಥ ಚಂದ್ರನಂದನ ಬಳಿಯ ಕಂಬಿ ನಾಯಕಿಡೆ,

ಅವನ ಹಾಡಿನಿನಿದಿಗೆ ಅರಳಿ ಕರಗಿದ್ದು
ಯಶೋಧರನ ಅಸಹಾಯಕತೆ ಮಾತ್ರ
ಅವನಂಥ ಸುಕುಮಾರ ಪುರುಷಾಕಾರದಲ್ಲೂ
ಹಿಂಸೆಯ ಹಿಟ್ಟಿನ ಹುಂಜ ಹೊಂಚಿತ್ತು
ಸುಂದರ ಮನೋನಂದನದಲ್ಲಿ ಜಾಪತ್ಯೊಮ್ಮೆ ಧಗಧಗಿಸಿ
ಘೀಸಿಲ್ ಬೆಂತರವಾಗಿ ಬೆಂಬಿದ್ದಿತ್ತು

ನಿನಗೆ ವಿದಿತ ಗೊತ್ತಿರಲಾರದು ಒಥೆಲೊ
ಪಶ್ಚಾತ್ತಾಪದ ಬೆಂಕಿ ಸ್ನಾನಗಳ ನಡುವೆಯೂ
ನಾನು ಬಹಿಷ್ಕೃತೆಯಾಗುತ್ತಿದ್ದ ಬರ್ಬರ ರಹಸ್ಯ
ಈ ಅಮೃತಳ ಹೀರಿನ ಸಮೋಹ ಕತ್ತು ಕುಣಿದ
ಮಾಟಗಾರ ಮನ್ಮಥ ಲೀಲೆ
ಅಷ್ಟಾವಂಕನ ಸ್ಪರ್ಶೋನ್ಮತ್ತ ಮನಸ್ಸು ಮಾತ್ರ ಗ್ರಹಿಸಿತ್ತು
ಹೆಣ್ಣಿನ ಭೌತ ವೈಷಿಕತೆಯ ಅನನ್ಯ ದಾಸ್ಯ

ಕುಹಕದ ಚೌಕಟ್ಟಿನಲ್ಲಿ ನನ್ನ ಎತ್ತಿ ಹಿಡಿದ ಕಾಲ
ಯಶೋಧರರ ನೆರೆತ ಸಭೆಯಲ್ಲಿಂದು
ಒರೆದದ್ದೆಲ್ಲ ಸತ್ಯವಾಯಿತು
ಜಗತ್ತಿಗಿದೀಗ ಅಘಾತದ ಅವಕುಂಠನ ತೊಡಿಸಿ
ದೀರ್ಘ ಧ್ಯಾನದ ನಿನ್ನನರಸಿ ಓಡಿಬಂದ ಘಳಿಗೆ
ಒಬ್ಬ ಒಥೆಲೊ ಮಾತ್ರ ನನ್ನ ಜರಿದ
ಸಾವಿನ ಎದುರಲ್ಲಿ ನಾಯಿಯಂತೆ ಇರಿದ

**ಒಥೆಲೊ :**

ಇನಿಯೆ ಇಂದುವದನೆಯೆ
ನಿನ್ನ ಕನಸುಗಾಮಿ ಸಂವೇದನ
ಒಡಲೊಳಗಿನ ವಿದ್ಯುಕ್ತ ಕಗ್ಗಂಟಿನ ಪದಪುಂಜ
ಸ್ನಿಗ್ಧವ ಪ್ರೇಮದ ಆತ್ಮದಮನ
ಈಗಷ್ಟೆ ನಿಲ್ಲುತ್ತಿರುವುದರಿಂದ
ಮರೀಚಿಕೆಗಳ ಅಲೆ, ಘಾತಗಳ ವಿವರ ಕೊಟ್ಟುಬಿಡುತ್ತೇನೆ

## ರೂಪಾಂತರ

೧.

ಒಬ್ಬ ಹುಡುಗನ ಬಗ್ಗೆ ಹೇಳುತ್ತೇನೆ ಕೇಳಿ
ಹುಟ್ಟುತ್ತಲೇ ಸೌಂದರ್ಯವನ್ನು ಸುರಿಯುತ್ತ ಹುಟ್ಟಿದ ಅವನು
ಆದರೂ ಮಗುವಿನ ನಗುವೇ ಅವನಾದ
ಅವನಿಡೀ ಪ್ರಪಂಚದ ನಗುವಾದ
ಪ್ರಕೃತಿಯ ಸೀಮೆಯಲ್ಲಿ ಎತ್ತರ ಬೆಳೆದವನು—ಕ್ರಮೇಣ
ಚೆಲುವಿನ ಮಾಯಾ ಕನ್ನಡಿಗಾಗಿ ತಪಸ್ಸೇ ನಡೆಸಿದ
ಕಂಡ ಕಂಡ ಕನ್ನಡಿಗಳಲ್ಲೆಲ್ಲ ಕುಬ್ಜನೊಬ್ಬ ತಿರಸ್ಕಾರದಲ್ಲಿ ಸ್ವಾಗತಿಸಿದ್ದ
ಕುಬ್ಜನನ್ನು ಹಂಗಿಸುತ್ತ ಕ್ರಿಮಿಯಾದವನು
ಸ್ವೇಚ್ಛೆಯ ಏಳುಸುತ್ತಿನ ಕೋಟೆ ಕಟ್ಟಿಕೊಂಡು
ಸೂರ್ಯ ಕಿರಣಗಳನ್ನು ಹುಡುಕಿ ಹುಡುಕಿ ಕೊಂದ
ಕತ್ತಲ ಗಾಂಧಾರಿ ಗರ್ಭದಲ್ಲಿ ದಿವ್ಯ ಕನಸುಗಳನ್ನು ಹಡೆದ

ಆದರೂ ಅದೃಶ್ಯವಾಗಿ ಬೆಂಬತ್ತಿದ್ದ ಅಪಹಾಸ್ಯದ ಬೆಂಕಿ
—ಅಗಸ್ತ್ಯನಂತೆ
ಕವುಚಿಬಿದ್ದ ಕತ್ತಲ ಸಾಗರವನ್ನೇ ಬತ್ತಿಸಿತು.
ಬಯಲಿಗೆ ಬಿದ್ದು ಸೂರ್ಯನ ಸತ್ಕಾರದಲ್ಲವನು ಬಂಧಿಯಾಗಿ
ಶಿಷ್ಟ ಪ್ರಪಂಚದಲ್ಲಿ ಬೆತ್ತಲಾದಾಗಲಷ್ಟೇ
ಹುಚ್ಚನಾಗಿ ರೂಪಾಂತರ ಹೊಂದಿದ್ದನು.
ಕ್ಷಮಿಸಿ, ಅವನ ಹುಚ್ಚಿಗೆ
ರೂಪಾಂತರದ ರೀತಿಯ ಬೇರೆ ಯಾವ ಕಾರಣವೂ ಇಲ್ಲವೇ
ಇಲ್ಲ.

೨.

ಒಬ್ಬ ಹುಡುಗಿಯ ಬಗ್ಗೆ ಹೇಳುತ್ತೇನೆ ಕೇಳಿ
ಈಗಲೂ ಶುಭ್ರ ನಾಚಿಕೆಯನ್ನು ಚಿಮುಕಿಸುತ್ತ
ಅಮಾವಾಸ್ಯೆಯ ಉತ್ಸವಗಳು ನಡೆವುದನ್ನು ನೋಡಿದ್ದೇನೆ
ಯುಗಗಳು ಶಿಲ್ಪಶಾಸ್ತ್ರದ ಮೂಸೆಯಲ್ಲಿ
ಆ ಚಿತ್ರವನ್ನು ಕೆತ್ತತೊಡಗಿದ್ದವು
ನಕ್ಷತ್ರಗಳು ಈ ಅಂದಗಾತಿಯ ಸೇವೆಗೆ ಸೊಂಟಕಟ್ಟಿದ್ದವು
—ಅಂತ ಕವಿಯಾಗಿ ವಿವರಿಸುವುದಕ್ಕಿಂತಲೂ
ನಕ್ಷತ್ರಗಳೇ ಇಲ್ಲದ ಅಗಾಧ ಬಾನಿನಂತಿದ್ದಳೆಂದರೆ
ಹೆಚ್ಚು ನಿಷ್ಠ ವರ್ಣನೆಯಾಗುತ್ತದೆ.

ಪಾಶ್ಚಾತ್ಯ ನಾಗರೀಕತೆ ಸ್ಪರ್ಶವನ್ನು ವಿಕಾಸಶೀಲಳಾಗಿದ್ದ
ಆ ಕುಸುಮಬಾಲೆಯ ಮುಖ ಸರೋವರದಲ್ಲಿ
ನೀಲ ಕಮಲದ ಕಣ್ಣುಗಳು ಅರಳಿಕೊಂಡಿದ್ದವು
ಪುರುಷರ ಪ್ರತಿ ಉಸಿರೂ—ಅವಳಿಗೆ ಸಲ್ಲುವ ನಮಸ್ಕಾರವಾಗುತ್ತಿತ್ತು—
ಈ ನಗುವ ಪಂಜರದೊಳ ಗಾಳಿಯಾಗಿ ತೇಲಲು ಬಯಸಿದ್ದರೆ
ಚರ್ಮದ ಹಡಗಲ್ಲಿ ಕೂತು
ನೆತ್ತರ ಹೊಳೆಯಲ್ಲಿ ಬಾಣ್ಯಾಗೆ ಹಿಡಿಯಬಹುದಿತ್ತು
ದುಸ್ಸಹ ನಿಧಾನಗಳಲ್ಲಿ ಮುಗುಳ್ನಗುತ್ತ
ಲಂಗರು ಹೂಡುತ್ತಿದ್ದ ಘಳಿಗೆ

ನೆರಳು ಕೂಡ ಸವತಿಯಾಗಲು ಸಾಧ್ಯವಿರಲಿಲ್ಲ
ಜಾತ್ರೇ ನಡುತ್ತಿದ್ದ ಒಪ್ಪ ಹಠಾತ್ತನೆ
ನಗೆಗೆ ರಾಜೀನಾಮೆಯಿತ್ತ ಅವಳು

ವಿಲಕ್ಷಣ ಮೌನಿಯಾದಳು ; ಶಬ್ದದ್ವೇಷಿಯಾದಳು
ಕ್ಷಮಿಸಿ, ಅವಳು ಹುಚ್ಚಿಯಾಗಿರಲಿಲ್ಲ
ಕೇವಲ ತಾನು ಹೆಣ್ಣೆಂದು ಅರಿತಿದ್ದಳು, ಅಷ್ಟೆ.

## ಪ್ರಣಯ ಕೊನೆಯುಸಿರೆಳೆದ ಆ ರಾತ್ರಿ

ಮಳೆ ಹಾನಹಾನವಾಗಿ ಸುರಿಯುತ್ತಿತ್ತು
ಮುದಿ ಮರಗಳಲ್ಲಿನ ಹರೆಯದ
ನಗೆಯ ಬಲೆಯನ್ನು ಎಲ್ಲೆಡೆ ಹರವುತ್ತ
ಗಾಳಿ ತನ್ನನ್ನೆ ಚಿಂದಿ ಚಿಂದಿಯಾಗಿ ಹರಿದುಕೊಳ್ಳುತ್ತಿತ್ತು
ಸಿಕ್ಕಷ್ಟೆ ಮಿಂಚು ಬಳ್ಳಿಗಳನ್ನು ಹೊಸೆದು
ಕತ್ತಲನ್ನಿಡೀ ಕಟ್ಟಿಹಾಕಿರುವ ಸಂಚಿನ ರಹಸ್ಯ ಸಭೆ ಕೂಡಿತ್ತು

ಆಗ ನೀನು ನನ್ನ ರೆಟ್ಟೆಗೆ ಜೋತು ಬಿದ್ದಿದ್ದೆ :
ಗಲ್ಲಿಯಲ್ಲಿ ಹನಿಯುತ್ತಿದ್ದ ನೀರಧಾರೆ
ರಾತ್ರಿಗೆ ಲಂಗರು ಹೊಡೆದಂತೆ.

ಊದಿಕೊಂಡ ಇಂಥ ರೋಗಿಷ್ಟ ಇರುಳಲ್ಲಿ
ನಿನ್ನ ಚುಂಬಕ ಕೈಗಳಿಂದ ಮುಚ್ಚುತ್ತ ನನ್ನ ಮುಖವನ್ನು
—ಅಥವ ತೆರವುತ್ತ ಭಾವನೆಗಳ ಬರ್ಬರತೆಯನ್ನು
ಪ್ರಶ್ನಿಸಿದ್ದೆ ಆತಂಕವನ್ನು :
ಸುಕೋಮಲ ಕಂಠದ
—ಅಸ್ಪಷ್ಟ ದನಿಯಲ್ಲಿ

ಆದರೆ ಬದುಕಿಂದೂ ಪ್ರಶ್ನೆಗಳನ್ನು ಕೊಳ್ಳುವುದಿಲ್ಲ ಗೆಳತಿ.

(ಕೊರಿಯೆವ್ ಪದ್ಯವೊಂದರ ಸ್ಫೂರ್ತಿ)

## ರಮಜಾನಿನ ಕೊನೆ ರಾತ್ರಿ

ಅದು ರಮಜಾನಿನ ಕೊನೆ ರಾತ್ರಿ
ಬಿಳಿ ಮೀಸೆಯ ಚಂದ್ರ ಸುಂದರ ಜಗತ್ತಿಗೆ
ಕಾರ್ಮೋಡಗಳ ಬುರುಖಾ ಹೊಲೆದು ಕೊಡುತ್ತಿದ್ದ

ಅತ್ತರಿನ ಸಿಪಾಯಿಗಳು ಎಚ್ಚರದ ವಾಸನೆಯುರದಂತೆ
ಬೆವರದೇಹಗಳನ್ನು ಮತ್ತಲ್ಲಿ ಕೆಡಹಿದ್ದವು
ಮುಲ್ಲಾನ ಅಮಲು ಮಂತ್ರಗಳು
ಆತಂಕದ ಮನಸುಗಳ ಪಹರೆಯಲ್ಲಿದ್ದವು

ಸೈತಾನ ಬಂದೀಖಾನೆಗಳೊಳಗೇ ಖಾಯಂ
ಖಾವಂದರಿಗಾಗಿ ಕುಸುಮಿತ ತನುವನ್ನು ಬೀವಿಯರು ಹಾಸಿಕ್ಕಿದಾಗ
ಹೊಂಚಿಕೂತ ರಮಜಾನ್ ಚಂದ್ರ
ಮಧ್ಯಕಾಲೀನ ಹಾಡಿಗೆ ಬಿಳಿಯ ಕತ್ತಲನೆರಚಿದ
ಹಬ್ಬದ ರಾತ್ರಿಯ ಆ ಉನ್ಮತ್ತ ಲೋಕದಲ್ಲಿ
ಚಲಿಸುತ್ತಿದ್ದ ನಕ್ಷತ್ರಗಳು ನಿರಾಕಾರ
ಮುಸುಗು ತೊರೆದವು.

ಉಸಿರಾಡುವ ಗೋರಿಗಳ ಆ ಪುರಾಣ ಜಗತ್ತಿನಲ್ಲೊಂದು
ಪುನುಗು ಬಜಾರಗಳ ಗುಪ್ತಗಾಮಿ ಹುಸಿ ಆಸ್ಫೋಟನೆ
ಹಾಡ ಹಗಲಿನಂತಹ ಅಜ್ಞಾನಿಗೆ ಕಟ್ಟಿರುಳಿನಂತಹ ತಾವು
ಎಂದೆಂದಿಗಾದರೂ ಕಾಣಬೀಳಲು ಶಕ್ಯವೆ ?
ಅನುಮಾನದ ಅರ್ಥಪೂರ್ಣ ಕವಲುಗಳಲ್ಲಿ
ರಾತ್ರಿಯುದ್ದಕ್ಕೂ ಸಾಗಿತ್ತು ನಿದ್ರಿಸುವ ಕಿಂಬಿನಂತಹ

ಪ್ಯಾಟಿ ಮೆಹಂದಿಯ ಮೆರವಣಿಗೆ
ಜಾಗ್ವಾರ್‌ನ ಭೀತ ಚೆಲುವಿನ ಬಗೆ

ಪುಟ್ಟ ಪುಟ್ಟ ದ್ವೀಪದಂತಹ ಜನಾಂಗಗಳು
ಒಡಲುಸ್ತ್ರ ನೆನವ ನಿಟ್ಟುಸಿರುಗಳ ಪತ್ತಲ ನೇಯುತ್ತಿದ್ದಾಗ
ಕವಿಯೊಬ್ಬ ಕೌಶಿಸ್ತುಗಳ ಸಭೆಯಲ್ಲಿ ಹಾಡುತ್ತಿದ್ದ :
ಕಡುಗತ್ತಲಲ್ಲಿ ಬುರುಖಾ ಧರಿಸಿ ಬರುವ
ಒಂಟೆಯಂತಹ ಮಂದಗಮನೆಯೆ
ಚಂದ್ರ ತಾರೆಯರ ತಿರುಳು ನಿನ್ನ ಕಾಣುವುದು ಬೇಡ
ಕತ್ತಲ ಪೊದೆಗಳಲ್ಲಿ ಆಮೋದವಾಗು ಬಾ
ನಿನ್ನ ಮೋಹಕ ಓಯಸಿಸ್ ಮುಖದ ನಾಚಿಕೆಯೊರತೆ
ಮಿಹರಾಬಕ್ಕಿಂತಲೂ ಹಿರಿಯದು ಅಲ್ಲಾನ ಆಣೆಯಿದೆ.

## ಮಿಂಚಿನ ವಾಸನೆ

ಮಿಂಚಿನ ವಾಸನೆ ಸುಳಿದಾಗ
ಮಣ್ಣಿನ ಹುಡಿ ಧೂಳಿಯೂ ಅರಳಿ
ಮರುಭೂಮಿಯಿಂದೀ ವಿಶ್ವವು ವನವಾಗುವಂತಹ
ನಿನ್ನ ನೆನಪು ಮರುಕಳಿಸುತ್ತ
ಆಕಾಶದ ಕನಸು ಕೂಡ ದಿಗ್ಭ್ರಮೆಗೊಳ್ಳುತ್ತದೆ
ಪ್ರಿಯ ಸಖಿ, ದುರಂತದ ಬಾಗಿಲಲ್ಲಿ ನಿಂತು
ಸ್ವರ್ಗದ ವಿಶಾಲ ಬಯಲಿನಲ್ಲಿ
ನನ್ನ ಜಾಗ ಹುಡುಕುತ್ತ ನಿಲ್ಲುವುದು
ಪುರಾಣದಲ್ಲಿನ ವಿಲಾಸವಿಲ್ಲದ ಪಾತ್ರವೊಂದನ್ನು ನಟಿಸಿದಂತೆ
ಆದರೂ ಅದರ ದಿಗಂತದಂಚಿನ ಏರುಪೇರು
ನಿನ್ನ ಬದುಕಿನ ಕೆಲವಾದರೂ ಲಕ್ಷಣಗಳೆಂಬಂತೆ
ಮಿಂಚುಗೊಳ್ಳುತ್ತಲೇ
ಮಿಡಿಗೊಳ್ಳುತ್ತವೆ.

ನಿನ್ನ ಕಾಲ ನಷ್ಟ ಆದಾಗಲೂ
ನನ್ನ ಆಯುಸ್ಸಿನ ನಡಿಗೆ, ಕಾಲಗತಿಗಳನ್ನು ನಿರ್ಧರಿಸುವ
ಅದ್ಭುತ ಮಾನದಂಡವೆನಿಸುತ್ತ

ಸೀತೆಯ ಚೆಲುವ ಬೆಂಕಿ ಹಿಡಿದುಬಿಡದ
ಲಂಕಾಕ್ಷಿ ಮಾರೀಚ ಜಿಂಕೆಯಂತೆ
ಹದಿಹರೆಯದಂಗೇ ಕನ್ನವಿಡುವ
ನಿನ್ನ ಜುಮ್ಮು ನೋಟದ ಕಣ್ಣುಗಳಂತೂ
ಸೌಂದರ್ಯ ಪಾಕದ ಹದ ಎತ್ತುತ್ತವೆ
ಎದೆಯೊಳಗೆ ಮಹಾಕಾವ್ಯ ಹುತ್ತಗಟ್ಟುತ್ತದೆ

